# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1426 |
| ಮಾನ್ಯ ಸದ್ಯಸರ ಹೆಸರು : | ಶ್ರೀ ಹೆಚ್. ಎಂ. ರಮೇಶ್ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದವರು: | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 19-03-2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಸರ್ಕಾರ ನೀಡಿರುವ ಅಬಕಾರಿ ಪರವಾನಗಿಗಳ ಸಂಖ್ಯೆ ಎಷ್ಟು; ಕಳೆದ ಮೂರು ವರ್ಷಗಳಿಂದ ರಾಜ್ಯದ ಬೊಕ್ಕಸಕ್ಕೆ ಸಂದಾಯವಾದ ಒಟ್ಟು ಅಬಕಾರಿ ಆದಾಯವೆಷ್ಟು; (ವಿವರ ನೀಡುವುದು) | ಕಳೆದ ಮೂರು ವರ್ಷಗಳಿಂದ ಸರ್ಕಾರ ನೀಡಿರುವ ಪರವಾನಿಗೆಗಳ ಮಾಹಿತಿಯೊಂದಿಗೆ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗಿರುವ ಆದಾಯದ ಮೊತ್ತವನ್ನು ಕೆಳಕಂಡಂತೆ ನೀಡಿದೆ. |

| ಕ್ರ.ಸಂ | ವರ್ಷ | ಸನ್ನದುಗಳ ಸಂಖ್ಯೆ | ಆದಾಯ (ರೂ.ಕೋಟಿಗಳಲ್ಲಿ) |
|---|---|---|---|
| 1. | 2017-18 | 10379 | 17948.51 |
| 2. | 2018-19 | 10949 | 19943.93 |
| 3. | 2019-20 (ಫೆಬ್ರವರಿ-20 ವರೆಗೆ) | 11136 | 19831.58 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ರಾಜ್ಯದಲ್ಲಿ ಅನಧಿಕೃತವಾಗಿ ಮದ್ಯ ಮಾರಾಟ ಮಾಡುವವರ ವಿರುದ್ಧ ಸರ್ಕಾರ ಯಾವ ಯಾವ ಕ್ರಮ ಕೈಗೊಂಡಿದೆ; | ಅನಧಿಕೃತವಾಗಿ ಮದ್ಯ ಮಾರಾಟ ಮಾಡುವ ಪ್ರಕರಣಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಅಬಕಾರಿ ಕಾಯ್ದೆ ಮತ್ತು ತತ್ಸಂಬಂಧ ನಿಯಮಗಳ ಜಾರಿಗೊಳಿಸುವ ಕ್ರಮಗಳನ್ನು ಚುರುಕುಗೊಳಿಸಲಾಗಿದೆ. ಅಕ್ರಮವಾಗಿ ಮದ್ಯ ಮಾರಾಟ ಮಾಡುವವರ ವಿರುದ್ಧ ಅಬಕಾರಿ ಕಾಯ್ದೆಯ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಲಾಗುತ್ತಿದೆ. ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ 2 ತಿಂಗಳಿಗೊಮ್ಮೆ ನಡೆಯುವ ಸಮನ್ವಯ ಸಮಿತಿ ಸಭೆಯಲ್ಲೂ ಅಬಕಾರಿ ಅಕ್ರಮಗಳ ತಡೆಗಟ್ಟುವ ಕುರಿತು ಅಗತ್ಯ ನಿರ್ದೇಶನಗಳನ್ನು ನೀಡಲಾಗುತ್ತಿದೆ. ಅಬಕಾರಿ ಇಲಾಖೆಯ ಸಿಬ್ಬಂದಿಯು ಸದಾ ಕಾಲ ಜಾಗೃತರಾಗಿದ್ದು ನಿರಂತರ ದಾಳಿ ಕಾರ್ಯ ನಡೆಸಿ ಅಕ್ರಮ ಮದ್ಯ ಮಾರಾಟವಾಗದಂತೆ ಎಚ್ಚರ ವಹಿಸುವಂತೆ ನಿರ್ದೇಶಿಸಲಾಗಿದೆ. |
| ಇ) | ಮರು ನವೀಕರಣಗೊಳ್ಳದ ಅಬಕಾರಿ ಲೈಸೆನ್ಸ್ ಮೂಲಕವೇ ಇನ್ನೂ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಅವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು; (ಮಾಹಿತಿ ನೀಡುವುದು) | ಬಂದಿಲ್ಲ. |

| | | |
|---|---|---|
| ಈ) | ಅಬಕಾರಿ ಪರವಾನಗಿ ಲೈಸೆನ್ಸ್ ಹೊಂದಿರುವ ವ್ಯಕ್ತಿ ಅದನ್ನು ಮತ್ತೊಬ್ಬನಿಗೆ ಲೀಸ್‌ಗೆ ಅಥವಾ ಬಾಡಿಗೆಗೆ ಅಥವಾ ಮಾರಾಟ ಮಾಡಲು ಇರುವ ಮಾನದಂಡಗಳೇನು; ಹೀಗೆ ಮಾಡಲು ಸಾಧ್ಯವಿಲ್ಲದಿದ್ದರೆ, ಇದರ ನಿಯಂತ್ರಣಕ್ಕೆ ಸರ್ಕಾರ ಯಾವ ಕ್ರಮ ಕೈಗಳ್ಳಲಿದೆ? (ಮಾಹಿತಿ ನೀಡುವುದು) | ಅಬಕಾರಿ ಪರವಾನಿಗೆಯ ಸನ್ನದು ಹೊಂದಿರುವ ವ್ಯಕ್ತಿಯು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) 1967 ರ ನಿಯಮ 17–ಬಿ ರನ್ವಯ ಇನ್ನೊಬ್ಬ ವ್ಯಕ್ತಿಗೆ, ಪಾಲುದಾರಿಕೆ ಸಂಸ್ಥೆಗೆ ಹಾಗೂ ನೊಂದಾಯಿತ ಕಂಪನಿಗೆ ವರ್ಗಾಯಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>ಅಬಕಾರಿ ಪರವಾನಿಗೆಯನ್ನು ಹೊಂದಿರುವ ವ್ಯಕ್ತಿಯು ಬೇರೊಬ್ಬ ವ್ಯಕ್ತಿಗೆ ಲೀಸ್ ಅಥವಾ ಬಾಡಿಗೆಗೆ ನೀಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ ಅಲ್ಲದೇ ಬಾಡಿಗೆಗೆ ನೀಡಿದ ಪಕ್ಷದಲ್ಲಿ ಅಂತಹ ಸನ್ನದುದಾರರ ವಿರುದ್ಧ ಅಬಕಾರಿ ಕಾಯ್ದೆಯನ್ವಯ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ. |

18/3/20

(ಎಚ್. ನಾಗೇಶ್)
ಅಬಕಾರಿ ಸಚಿವರು

ಆಇ 37 ಇ.ಎಲ್.ಕ್ಯೂ. 2020